# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 118 (67) |
| ಸದಸ್ಯರ ಹೆಸರು | : | ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 13-09-2021 |
| ಉತ್ತರಿಸುವವರು | : | ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| 1 | ಕೊಡಗು ಜಿಲ್ಲೆಯಲ್ಲಿ ಕಾಡಿನಿಂದ ಊರು, ಗದ್ದೆ ಮತ್ತು ತೋಟಗಳಿಗೆ ದಾಳಿ ಮಾಡುತ್ತಿರುವ ಕಾಡಾನೆಗಳನ್ನು ತಡೆಯಲು ಜಿಲ್ಲೆಯಲ್ಲಿ ಯಾವ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ ಹಾಗೂ ರೈಲ್ವೆ ಹಳಿಗಳನ್ನು ಅಳವಡಿಸುವ ಯೋಜನೆಯು ಜಿಲ್ಲೆಯಲ್ಲಿ ಎಷ್ಟು ಪ್ರಗತಿಯಾಗಿದೆ; (ಇದಕ್ಕೆ ವ್ಯಯ ಮಾಡಲಾದ ಅನುದಾನ ಎಷ್ಟು; (ಪೂರ್ಣ ವಿವರಗಳನ್ನು ನೀಡುವುದು) | ಕೊಡಗು ಜಿಲ್ಲೆಯಲ್ಲಿ ಕಾಡಿನಿಂದ ಊರು, ಗದ್ದೆ ಮತ್ತು ತೋಟಗಳಿಗೆ ದಾಳಿ ಮಾಡುತ್ತಿರುವ ಕಾಡಾನೆಗಳನ್ನು ತಡೆಯಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ಆನೆ ತಡೆ ಕಂದಕ ನಿರ್ವಹಣೆ<br>2. ಸೋಲಾರ್ ತಂತಿ ಬೇಲಿ ನಿರ್ಮಾಣ/ನಿರ್ವಹಣೆ<br>3. ತೂಗು ಸೋಲಾರ್ ತಂತಿ ಬೇಲಿ ನಿರ್ಮಾಣ/ನಿರ್ವಹಣೆ<br>4. ಉಪಯೋಗಿತ ರೈಲು ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಾಣ<br>5. ವನ್ಯಪ್ರಾಣಿಗಳಿಗೆ ಕುಡಿಯುವ ನೀರಿಗಾಗಿ ಕೆರೆ/ಚೆಕ್‌ಡ್ಯಾಂಗಳ ನಿರ್ಮಾಣ ಮತ್ತು ಹಾಲಿ ಇರುವ ಕೆರೆಗಳ ಹೂಳೆತ್ತುವ ಕಾಮಗಾರಿಗಳನ್ನು ನಿರ್ವಹಿಸಲಾಗುತ್ತಿದೆ.<br>6. ಕೊಡಗು ಜಿಲ್ಲೆ ವ್ಯಾಪ್ತಿಯ ವಲಯಗಳಲ್ಲಿ ಕಾಡಾನೆ ಹಾವಳಿಯನ್ನು ತುರ್ತು ನಿರ್ವಹಣೆ ಕ್ಷಿಪ್ರ ಸ್ಪಂದನ ತಂಡಗಳನ್ನು ರಚಿಸಿ ಕಾರ್ಯನಿರ್ವಹಿಸಲಾಗುತ್ತಿದೆ.<br>7. ಆಯ್ದ ವಲಯಗಳಲ್ಲಿ ಕಾಡಾನೆಗಳನ್ನು ಮರಳಿ ಕಾಡಿಗೆ ಹಿಮ್ಮೆಟ್ಟಿಸುವ ತಂಡ ರಚನೆ ಮಾಡಲಾಗಿರುತ್ತದೆ.<br>8. ಕಾಡಾನೆ ಇರುವಿಕೆ ಅವುಗಳ ಚಲನವಲನಗಳ ಬಗ್ಗೆ ಸಾರ್ವಜನಿಕರಿಗೆ ರೈತರಿಗೆ ಮಾಹಿತಿ ನೀಡುವ SMS Alert System ಕಾರ್ಯ ನಿರ್ವಹಿಸುತ್ತಿದೆ.<br>9. ವನ್ಯಪ್ರಾಣಿಗಳ ದಾಳಿಯಿಂದ ಬಾಧಿತ ಗ್ರಾಮಗಳ ಜನರೊಂದಿಗೆ ಸಂಪರ್ಕ ಸಭೆಯನ್ನು ನಡೆಸಲಾಗುತ್ತಿದೆ.<br>10. ಕೊಡಗು ಜಿಲ್ಲೆಯಲ್ಲಿ 2014 ರಿಂದ ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ 11 ಕಾಡಾನೆಗಳನ್ನು ಸೆರೆಹಿಡಿದು ಸ್ಥಳಾಂತರ ಮಾಡಲಾಗಿರುತ್ತದೆ. |

| | | |
|---|---|---|
| | | 11. ವಿರಾಜಪೇಟೆ ವಿಭಾಗದಲ್ಲಿ 9 ಆನೆಗಳಿಗೆ ರೇಡಿಯೋ ಕಾಲರ್‌ಗಳನ್ನು ಅಳವಡಿಸಿ ಅವುಗಳ ಚಲನ ವಲನಗಳ ಬಗ್ಗೆ ನಿಗಾವಹಿಸಲಾಗುತ್ತಿದೆ.<br>12. ಕೊಡಗು ಜಿಲ್ಲೆಯ ನಾಗರಹೊಳೆ ವ್ಯಾಪ್ತಿಯಲ್ಲಿ ರಕ್ಷಣಾ ಕೆಲಸಗಳಿಗಾಗಿ ಎಸ್.ಟಿ.ಪಿ.ಎಫ್ ತಂಡ ನೇಮಕ ಮಾಡಿ ರಕ್ಷಣಾ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ.<br>13. ವನ್ಯಪ್ರಾಣಿಗಳ ರಕ್ಷಣಾ ದೃಷ್ಟಿಯಿಂದ ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶದಲ್ಲಿ 37 ವನ್ಯಪ್ರಾಣಿ ಹತ್ಯೆ ತಡೆ ಶಿಬಿರಗಳನ್ನು ಸ್ಥಾಪನೆ ಮಾಡಿ ಪ್ರತಿ ದಿನ ಗಸ್ತು ಮಾಡಿ ಯಾವುದೇ ಅಕ್ರಮ ಚಟುವಟಿಕೆಗಳು ನಡೆಯದಂತೆ ಕ್ರಮ ಕೈಗೊಳ್ಳಲಾಗುತ್ತಿದೆ.<br>14. ರಕ್ಷಣಾ ಕಾರ್ಯದ ಸಿಬ್ಬಂದಿಗಳಿಗೆ ಹಾಗೂ ಇಲಾಖಾ ಸಿಬ್ಬಂದಿಗಳಿಗೆ ವೈರ್‌ಲೆಸ್ ವಾಕಿ ಟಾಕಿ, ಶಸ್ತ್ರಾಸ್ತ್ರ, ಆಹಾರ ಸಾಮಗ್ರಿಗಳನ್ನು ಒದಗಿಸಿ ಪರಿಣಾಮಕಾರಿಯಾಗಿ ರಕ್ಷಣಾ ಕಾರ್ಯ ಕೈಗೊಳ್ಳಲಾಗುತ್ತಿದೆ.<br>15. ಮಾನವ-ಪ್ರಾಣಿ ಸಂಘರ್ಷವನ್ನು ತಡೆಯಲು ತಕ್ಷಣದ ಕ್ರಮಗಳನ್ನು ತೆಗೆದುಕೊಳ್ಳಲು "ಕೊಡಗು ಮಾನವ-ವನ್ಯಪ್ರಾಣಿ ಸಂಘರ್ಷ ಉಪಶಮನ ಪ್ರತಿಷ್ಠಾನ" ವನ್ನು ವೃತ್ತ ಮಟ್ಟದಲ್ಲಿ ಸ್ಥಾಪಿಸಲಾಗಿದೆ.<br><br>ಉಪಯೋಗಿತ ರೈಲ್ವೆ ಹಳಿಗಳನ್ನು ಉಪಯೋಗಿಸಿ 9.516 ಕಿ.ಮೀ. ಬ್ಯಾರಿಕೇಡ್ ಅಳವಡಿಸುವ ಕಾಮಗಾರಿ ಕೈಗೊಂಡಿದ್ದು, ಈವರೆಗೆ 7.07 ಕಿ.ಮೀ. ಕಾಮಗಾರಿ ಪೂರ್ಣಗೊಂಡಿದ್ದು, ಇದಕ್ಕಾಗಿ ರೂ. 560.00 ಲಕ್ಷಗಳನ್ನು ವೆಚ್ಚ ಮಾಡಲಾಗಿದೆ. ಬಾಕಿ ಇರುವ 2.5 ಕಿ.ಮೀ.ಗೆ ರೈಲ್ವೆ ಕಂಬಗಳನ್ನು ಈಗಾಗಲೇ ಅಳವಡಿಸಲಾಗಿದ್ದು, ಅಡ್ಡ ಕಂಬಗಳನ್ನು ಅಳವಡಿಸುವ ಕಾಮಗಾರಿ ಪ್ರಗತಿಯಲ್ಲಿದೆ. ಪ್ರಸಕ್ತ ಸಾಲಿಗೆ ಬಿಡುಗಡೆಯಾಗಿರುವ ಅನುದಾನ ರೂ. 135.36 ಲಕ್ಷಗಳಲ್ಲಿ ಬಾಕಿ ಇರುವ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು. |
| 2 | ಕೊಡಗು ಜಿಲ್ಲೆಯಲ್ಲಿ ಗದ್ದೆಗಳಿಗೆ ಲಗ್ಗೆಯಿಡುತ್ತಿರುವ ಕಾಡು ಹಂದಿಗಳು ಗದ್ದೆಯಲ್ಲಿನ ಭತ್ತದ ಪೈರುಗಳನ್ನು ನಾಶಮಾಡುತ್ತಿರುವುದರಿಂದ ಜಿಲ್ಲೆಯ ಕೃಷಿಕರಿಗೆ ನಷ್ಟವಾಗುತ್ತಿದ್ದು, ಇದರ ಬಗ್ಗೆ ಅರಣ್ಯ ಇಲಾಖೆಯು ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ಕೊಡಗು ಜಿಲ್ಲೆ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ಕಾಡು ಹಂದಿಗಳಿಂದ ಕೃಷಿ ನಷ್ಟವಾದ ಬಗ್ಗೆ ಪರಿಹಾರ ಕೋರಿ ಕೃಷಿಕರಿಂದ ಯಾವುದೇ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ. ಇದಲ್ಲದೇ ಕಾಡುಹಂದಿಗಳ ಉಪಟಳ ಅತೀ ಹೆಚ್ಚಾದಲ್ಲಿ ಹಂದಿಗಳನ್ನು ಕೊಲ್ಲಲು ಆದೇಶ ನೀಡುವ ಅಧಿಕಾರವನ್ನು ಸಂಬಂಧಿಸಿದ ವೃತ್ತ ಅರಣ್ಯ/ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ. ಅಪಜೀ 96 ಎಫ್‌ಡಬ್ಲ್ಯೂಎಲ್ 2016, ದಿನಾಂಕ: 01-10-2016 ರಲ್ಲಿ ನೀಡಲಾಗಿದೆ. |

| | | |
|---|---|---|
| 3 | ಕೊಡಗು ಜಿಲ್ಲೆಯ ಅರಣ್ಯ ಇಲಾಖೆಯಲ್ಲಿ ಕಾಡು ಪ್ರಾಣಿಗಳಿಂದ ಹಾನಿಯಾದ ಕೃಷಿಗೆ ಹಾಗೂ ದನ, ಕರು ಹಾಗೂ ಮನುಷ್ಯರಿಗೆ ನೀಡುತ್ತಿರುವ ಧನ ಸಹಾಯ ಎಷ್ಟು? (ಕಳೆದ ಮೂರು ವರ್ಷಗಳಲ್ಲಿ ನೀಡಲಾದ ಪರಿಹಾರ ಮೊತ್ತ ಎಷ್ಟು; (ವರ್ಷಾವಾರು ನೀಡುವುದು) | ಕೊಡಗು ಜಿಲ್ಲೆ ವ್ಯಾಪ್ತಿಯಲ್ಲಿ ಕಾಡು ಪ್ರಾಣಿಗಳ ದಾಳಿಯಿಂದ ಉಂಟಾದ ಹಾನಿ ಪ್ರಕರಣಗಳಿಗೆ ಕಳೆದ ಮೂರು ವರ್ಷಗಳಲ್ಲಿ ಪಾವತಿಸಿದ ದಯಾತ್ಮಕ ಧನ ವಿವರ ಅನುಬಂಧದಲ್ಲಿ ಒದಗಿಸಿದೆ. |

**ಸಂಖ್ಯೆ: ಅಪಜೀ 59 ಎಫ್‌ಟಿಎಸ್ 2021**

**(ಉಮೇಶ್ ವಿ. ಕತ್ತಿ)**
**ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು**
**ಗ್ರಾಹಕರ ವ್ಯವಹಾರಗಳ ಸಚಿವರು**

೧೮

# ಚುಕ್ಕೆ ಗುರುತಿನ ಪ್ರಶ್ನೆಸಂಖ್ಯೆ: 118 (67) ರ ಅನುಬಂಧ
## ಕಳೆದ ಮೂರು ವರ್ಷಗಳಲ್ಲಿ ವನ್ಯಪ್ರಾಣಿಗಳ ದಾಳಿಯಿಂದ ಉಂಟಾದ ಹಾನಿ ಪ್ರಕರಣಗಳಿಗೆ ಪಾವತಿಸಲಾದ ದಯಾತ್ಮಕ ಧನದ ವಿವರ

| ವಿಭಾಗ | ಕೃಷಿ ನಷ್ಟ | | ಮಾನವ ಪ್ರಾಣ ಹಾನಿ | | ಮಾನವ ಗಾಯ | | ಸಾಕು ಪ್ರಾಣಿ ನಷ್ಟ | | ಆಸ್ತಿ ನಷ್ಟ | | ಒಟ್ಟು | |
|---|---|---|---|---|---|---|---|---|---|---|---|---|
| | ಪ್ರಕರಣ | ಮೊತ್ತ (ಲಕ್ಷಗಳಲ್ಲಿ) | ಪ್ರಕರಣ | ಮೊತ್ತ (ಲಕ್ಷಗಳಲ್ಲಿ) | ಪ್ರಕರಣ | ಮೊತ್ತ (ಲಕ್ಷಗಳಲ್ಲಿ) | ಪ್ರಕರಣ | ಮೊತ್ತ (ಲಕ್ಷಗಳಲ್ಲಿ) | ಪ್ರಕರಣ | ಮೊತ್ತ (ಲಕ್ಷಗಳಲ್ಲಿ) | ಪ್ರಕರಣ | ಮೊತ್ತ (ಲಕ್ಷಗಳಲ್ಲಿ) |
| **2018-19** | | | | | | | | | | | | |
| ನಾಗರಹೊಳೆ | - | - | - | - | - | - | - | -- | - | - | - | - |
| ಮಡಿಕೇರಿ | 1117 | 54.28 | 0 | 0 | 4 | 0.688 | 18 | 1.505 | 0 | 0 | 1139 | 56.473 |
| ವೀರಾಜಪೇಟೆ | 1328 | 89.00 | 0 | 0 | 4 | 0.872 | 19 | 1.66 | 5 | 0.45 | 1356 | 91.982 |
| ಮಡಿಕೇರಿ ವಜೀ | 837 | 49.46 | 0 | 0 | 2 | 0.644 | 19 | 1.875 | 17 | 2.02 | 875 | 53.999 |
| ಒಟ್ಟು: | 3282 | 192.74 | 0 | 0 | 10 | 2.204 | 56 | 5.04 | 22 | 2.47 | 3370 | 202.454 |
| **2019-20** | | | | | | | | | | | | |
| ನಾಗರಹೊಳೆ | 894 | 50.98 | 0 | 0 | 7 | 2.851 | 110 | 8.65 | 37 | 2.282 | 1048 | 64.76 |
| ಮಡಿಕೇರಿ | 1259 | 73.03 | 0 | 0 | 4 | 1.81 | 7 | 0.64 | 0 | 0 | 1270 | 75.49 |
| ವೀರಾಜಪೇಟೆ | 1246 | 84.61 | 0 | 0 | 7 | 1.915 | 16 | 1.52 | 2 | 0.18 | 1271 | 88.23 |
| ಮಡಿಕೇರಿ ವಜೀ | 744 | 43.94 | 2 | 10.00 | 2 | 0.63 | 27 | 2.70 | 39 | 3.73 | 814 | 61.00 |
| ಒಟ್ಟು: | 3478 | 196.79 | 3 | 10 | 18 | 5.371 | 164 | 13.11 | 78 | 6.152 | 3741 | 289.48 |
| **2020-21** | | | | | | | | | | | | |
| ನಾಗರಹೊಳೆ | 1314 | 75.03 | 2 | 20.00 | 6 | 1.45 | 46 | 40.50 | 44 | 32.32 | 1416 | 105.48 |
| ಮಡಿಕೇರಿ | 1428 | 96.44 | 0 | 0 | 3 | 5.31 | 5 | 0.44 | 0 | 0 | 1440 | 102.19 |
| ವೀರಾಜಪೇಟೆ | 1430 | 94.05 | 0 | 0 | 2 | 2.44 | 1 | 0.10 | 4 | 0.58 | 1437 | 97.179 |
| ಮಡಿಕೇರಿ ವಜೀ | 797 | 48.30 | 0 | 0 | 0 | 0 | 3 | 0.30 | 34 | 3.40 | 834 | 52.00 |
| ಒಟ್ಟು: | 4969 | 313.82 | 2 | 20.00 | 11 | 9.2 | 55 | 41.34 | 82 | 36.3 | 5127 | 356.849 |